ಎಸ್. ಶಿವಣ್ಣ

# ಮೈಸೂರು ಅರಮನೆ ಪಂಚಗವಿಮಠದ ಶಿವಬಸವಸ್ವಾಮಿಗಳು : ಒಂದು ಟಿಪ್ಪಣಿ

ಶಕ ೧೭೬೩ರಲ್ಲಿದ್ದ ಸುಲೇಗಾವಿ ಚರಮೂರ್ತಿಗಳಾದ ಶಿವಬಸವ ದೇಶಿಕೇಂದ್ರ ಸ್ವಾಮಿಗಳು ಮಹಿಸೂರ ಚಾಮುಂಡಾದ್ರಿ ಪಂಚಗವಿಮಠಕ್ಕೆ ಕಾರಣಕರ್ತರು.[1]

ಇವರಿಗೆ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೭೬೮ರ ಸಂದ ವರ್ತಮಾನ ಪರಾಭವ ಸಂವತ್ಸರದ ಮಾಘ ಶುದ್ಧ ೧೫ ಭಾನುವಾರದಲ್ಲಿ ಮಹಿಸೂರ ಸಂಸ್ಥಾನದ ಚಾಮರಾಜ ಒಡೆಯರವರು ಮಠಾ ಕಟ್ಟಿಸಿ ಒಪ್ಪಿಸಿದ ಸೇವೆಯನ್ನು ಕುರಿತ ಶಿಲಾಶಾಸನವೊಂದು ಉಪಲಬ್ಧವಿದೆ.[2]

ಆದೇ ವರ್ಷ ಅಂದರೆ ಪರಾಭವ ಸಂವತ್ಸರದ ಕಾರ್ತೀಕ ಬಹುಳ ೧೦ ಮಿ ಭೃಗುವಾಸರ ಅನುರಾಧ ನಕ್ಷತ್ರದಲ್ಲಿ ಮಲ್ಲಪ್ಪದೇವರು ಶಿವಬಸವ ದೇಶಿಕೇಂದ್ರರಿಗೆ ಮೌನಪ್ಪಪಂಡಿತನ 'ವೀರಶೈವಾಚಾರ ಕೌಸ್ತುಭ' ಗ್ರಂಥವನ್ನು ಬರೆದುಕೊಟ್ಟಿದ್ದಾರೆ.[3]

ಶಕ ೧೭೭೦ನೆಯ ಕೀಲಕ ಸಂವತ್ಸರ ಶ್ರಾವಣ ಬ ೫ರ ಕಾಲೋಲ್ಲೇಖವನ್ನುಳ್ಳ ಪತ್ರವೊಂದರಲ್ಲಿ ಇವರನ್ನು ಚಿನ್ಮೂಲಾದ್ರಿ ಮಹಾಸನ್ನಿಧಿ ಆಜ್ಞಾಧಾರಕರೆಂದು ಹೆಸರಿಸಿದೆ. ಅಲ್ಲದೇ, ಅದೇ ಪತ್ರದಿಂದ ಇವರು ಚಿದ್ಘನ ಶಿವಾಚಾರ್ಯರೆಂಬ ಚರಮೂರ್ತಿಗಳನ್ನು ಮಾಡಿದ ವಿಚಾರ ತಿಳಿದುಬರುತ್ತದೆ. ಚಿನ್ಮೂಲಾದ್ರಿ ಸಂಸ್ಥಾನಕ್ಕೆ ಸಂಬಂಧಿಸಿದಂತೆ ವಿನಾಯಿತಿ ಹಾಗೂ ಗೌರವಗಳಿಗೆ ಸಂಬಂಧಿಸಿದ ರಹದಾರಿ ಅಪ್ಪಣೆ ಇತ್ಯಾದಿಗಳನ್ನು ಪಡೆಯಲು ಕಾರ್ಯಪ್ರವೃತ್ತರಾಗಲು ಸೂಚಿಸಿದೆ.[4]

ಈ ಪತ್ರದ ಕಾಲವಾದ ಶಕ ೧೭೭೦ರಲ್ಲಿ ಚಿನ್ಮೂಲಾದ್ರಿಯ ಶೂನ್ಯಸಿಂಹಾಸನದಲ್ಲಿ ಸಣ್ಣಪಾದದ ಚೆನ್ನವೀರದೇಶಿಕರು (ಕ್ರಿ.ಶ. ೧೮೪೦–೧೮೬೦) ಪೀಠಾಧಿಪತಿಗಳಾಗಿದ್ದರು.

---

1. ಕೆ. ೧೬೯೪, 'ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ', ಏಳನೆಯ ಸಂಪುಟ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೦, ಕ್ರಮಾಂಕ ೧೫
2. ಎಪಿಗ್ರಾಫಿಯ ಕರ್ನಾಟಿಕಾ, ಐದನೆಯ ಸಂಪುಟ, ಮೈಸೂರು ಜಿಲ್ಲೆ, ಕ್ರಮಾಂಕ ೧೬೩, ಮೈಸೂರು ವಿಶ್ವವಿದ್ಯಾನಿಲಯ, ೧೯೭೬, ಪು. ೨೯೧
3. ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ ಸಂಗ್ರಹದ ಓಲೆ ಕೃತಿ
4. ಕೆ. ಆರ್. ಬಸವರಾಜು : 'ವೀರಶೈವ ವೀರಸಿಂಹಾಸನ ಬಾಳೆಹಳ್ಳಿ-ಗೋಡೇಕೆರೆ, ಬೆಂಗಳೂರು, ೧೯೮೪, ಪು. ೫೪-೫೫

ಮುಳುಗುಂದದ ಬಾಲಲೀಲಾ ಮಹಾಂತ ಶಿವಯೋಗಿಗಳು (ಕ್ರಿ.ಶ. ೧೮೨೩-೧೮೫೯) ತಾವು ರಚಿಸಿದ ಸ್ವರವಚನಗಳಲ್ಲಿ[5] ಶಿವಬಸವಸ್ವಾಮಿಗಳನ್ನು ಸ್ಮರಿಸಿದ್ದಾರೆ. ಅಲ್ಲದೆ, ಅವರು ಲಿಂಗೈಕ್ಯರಾದುದರಿಂದ ದೊರಗೆ ಚಿಂತೆಯಾಗಿದೆ ಎಂಬ ಅಂಶವನ್ನು ಮತ್ತೊಂದು ಸ್ವರ ವಚನದಲ್ಲಿ ದಾಖಲಿಸಿದ್ದಾರೆ.[6]

ಬಾಲಲೀಲಾ ಮಹಾಂತಸ್ವಾಮಿಗಳು ಲಿಂಗೈಕ್ಯರಾದ ಕ್ರಿ.ಶ. ೧೮೫೯ಕ್ಕಿಂತ ಮೊದಲೇ ಶಿವಬಸವಸ್ವಾಮಿಗಳು ಲಿಂಗೈಕ್ಯರಾದದ್ದು ಸ್ಪಷ್ಟ. ಶಕ ೧೭೭೦ರ ಅಂದರೆ ಕ್ರಿ.ಶ. ೧೮೪೮ರ ದಾಖಲೆಯೇ ಅವರ ಬಗೆಗೆ ತಿಳಿಸುವ ಅರ್ವಾಚೀನ ಉಲ್ಲೇಖ. ಹೀಗಾಗಿ ಶಿವಬಸವ ದೇಶಿಕೇಂದ್ರರು ಕ್ರಿ.ಶ. ೧೮೪೮-೧೮೫೯ರ ನಡುವಣ ಅವಧಿಯಲ್ಲಿ ಲಿಂಗೈಕ್ಯರಾಗಿದ್ದಾರೆ.

---

5. ಶಿ. ಶಿ. ಬಸವನಾಳ (ಸಂ.) : ಬಾಲಲೀಲಾ ಮಹಾಂತ ಶಿವಯೋಗಿಗಳ ಕೈವಲ್ಯದರ್ಪಣ, ಧಾರವಾಡ, ೧೯೫೨, ಪು. ೧೬೩, ೧೬೪

6. ಅದೇ, ಪು. ೧೭೧